ಆರ್. ಜಗದೀಶ್ *

# ಮಾಗಡಿ ತಾಲ್ಲೂಕಿನ ಹೊಸಪಾಳ್ಯದ ಬೃಹತ್ ಶಿಲಾಯುಗದ ನಿವೇಶನ

ಪ್ರಾಗೈತಿಹಾಸಿಕ ಯುಗವನ್ನು ಆದಿಶಿಲಾಯುಗ, ಸೂಕ್ಷ್ಮ ಶಿಲಾಯುಗ, ಮತ್ತು ನವಶಿಲಾಯುಗ ಎಂದು ಮೂರು ಭಾಗವಾಗಿ ವಿಂಗಡಿಸಲಾಗಿದೆ. ನವಶಿಲಾಯುಗದಲ್ಲಿ ಶಿಲಾಯುಧಗಳ ಜೊತೆಯಲ್ಲಿಯೇ ತಾಮ್ರದ ಆಯುಧಗಳನ್ನು ಬಳಸಲಾರಂಭಿಸಿದುದರಿಂದ ಈ ಯುಗವನ್ನು ತಾಮ್ರಶಿಲಾಯುಗ ಎಂದೂ ಕರೆಯುತ್ತಾರೆ. ನಂತರದ ಕಾಲದಲ್ಲಿ ಕಬ್ಬಿಣದ ಆವಿಷ್ಕಾರವಾಗಿ ಕಬ್ಬಿಣದ ಆಯುಧಗಳು ಬಳಕೆಗೆ ಬಂದುದರಿಂದ ಈ ಯುಗವನ್ನು ಕಬ್ಬಿಣದ ಯುಗವೆಂದು ಕರೆಯುತ್ತಾರೆ. ಈ ಯುಗದ ಜನರು ಬೃಹದಾಕಾರದ ಕಲ್ಲು ಚಪ್ಪಡಿಗಳನ್ನು ಬಳಸಿ ಸಮಾಧಿಗಳನ್ನು ನಿರ್ಮಿಸುತ್ತಿದ್ದುದರಿಂದ ಈ ಯುಗವನ್ನು ಬೃಹತ್‌ಶಿಲಾಯುಗ ಎಂದೂ ಕರೆಯುತ್ತಾರೆ.

ಕರ್ನಾಟಕದಾದ್ಯಂತ ಬೃಹತ್ ಶಿಲಾಯುಗದ ಅನೇಕ ನೆಲೆಗಳು ಪತ್ತೆಯಾಗಿವೆ. ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿಯೂ ಮಾಗಡಿ ತಾಲ್ಲೂಕಿನಲ್ಲಿ ಸಾವನದುರ್ಗದ ಇಟ್ಟಿಗೆಬೈಲು, ಹೂಜಿಗಲ್ಲು, ಸೋಲೂರು ಹೋಬಳಿಯ ಕಲ್ಯಾಣಪುರ ಮುಂತಾದ ಸ್ಥಳಗಳಲ್ಲಿ ಬೃಹತ್ ಶಿಲಾಯುಗದ ಅನೇಕ ನೆಲೆಗಳು ಪತ್ತೆಯಾಗಿದ್ದವು.

ಇತ್ತೀಚೆಗೆ ಮಾಗಡಿ ತಾಲ್ಲೂಕಿನ ಸೋಲೂರು ಹೋಬಳಿಯ ಹೊಸಪಾಳ್ಯ ಎಂಬ ಗ್ರಾಮದ ಬಳಿಯಲ್ಲಿರುವ 'ಕರೇಕಲ್ಲು' ಎಂಬ ಗುಡ್ಡದ ತಪ್ಪಲಿನಲ್ಲಿ ಬೃಹತ್ ಶಿಲಾಯುಗಕ್ಕೆ ಸೇರಿದ ೧೮ ಸಮಾಧಿಗಳು ಪತ್ತೆಯಾಗಿವೆ. ಈ ಸಮಾಧಿಗಳು ಆಯತಾಕಾರದ ಕೋಣೆ ಗೋರಿಗಳಾಗಿದ್ದು, ಅವುಗಳ ಸುತ್ತಲೂ ವೃತ್ತಾಕಾರದಲ್ಲಿ ಕಲ್ಲುಗಳನ್ನು ಹೊಂದಿವೆ. ಈ ಸಮಾಧಿಗಳನ್ನು ಹತ್ತಿರದಲ್ಲಿಯೇ ಇರುವ ಕರೇಕಲ್ಲು ಗುಡ್ಡದಲ್ಲಿ ದೊರೆಯುವ ಸು. ೮ ಅಂಗುಲ ಮಂದದ ಗ್ರಾನೈಟ್ (ಕಣಶಿಲೆ) ಚಪ್ಪಡಿಗಳಿಂದ ನಿರ್ಮಿಸಲಾಗಿದೆ. ಈ ಸಮಾಧಿಗಳು ಎಂಟು ಅಡಿ ಉದ್ದ, ಹಾಗೂ ನಾಲ್ಕು ಅಡಿ ಅಗಲವಾಗಿವೆ. ಎಲ್ಲಾ ಸಮಾಧಿಗಳನ್ನೂ ಆಯತಾಕಾರದಲ್ಲಿ ಸ್ವಸ್ತಿಕ್‌ದ ಆಕಾರದಲ್ಲಿ ಒಂದಕ್ಕೊಂದನ್ನು ಒರಗಿಸಿಟ್ಟಂತೆ ನಿರ್ಮಿಸಲಾಗಿದೆ. ಈ ಸಮಾಧಿಗಳೆಲ್ಲವಕ್ಕೂ ಪೂರ್ವ ಭಾಗದಲ್ಲಿ ಒಬ್ಬ ವ್ಯಕ್ತಿ ತೂರುವಷ್ಟು ಸ್ಥಳವನ್ನು ಬಿಡಲಾಗಿದೆ. ಈ ರೀತಿಯ ಸಮಾಧಿಗಳನ್ನು ಹಾದಿಕೋಣೆ ಗೋರಿಗಳೆಂದು ಕರೆಯುತ್ತಾರೆ.

ಪ್ರಸ್ತುತ ಹೊಸಪಾಳ್ಯದಲ್ಲಿ ದೊರೆತ ೧೮ ಸಮಾಧಿಗಳಲ್ಲಿ ಬಹುತೇಕ ಸಮಾಧಿಗಳು ಸುಸ್ಥಿತಿಯಲ್ಲಿದ್ದು ಕೇವಲ ಒಂದೆರಡು ಸಮಾಧಿಗಳು ಮಾತ್ರ ಹಾಳಾಗಿವೆ. ಹಾಗೆ ಹಾಳಾದ



ಹೊಸಪಾಳ್ಯದ ಬೃಹತ್ ಶಿಲಾಯುಗದ ಸಮಾಧಿ

* ಕನ್ನಡ ಉಪನ್ಯಾಸಕ, ಸರ್ವೋದಯ ಪ್ರಥಮ ದರ್ಜೆ ಕಾಲೇಜು, ಶ್ರೀರಾಮಪುರಂ, ಬೆಂಗಳೂರು-೫೬೦ ೦೨೧

ಸಮಾಧಿಗಳು ನಿಧಿಶೋಧಕರ ದಾಳಿಗೆ ಗುರಿಯಾಗಿ ಹಾಳಾಗಿವೆಯೆಂದು ಅಲ್ಲಿನ ಸ್ಥಳೀಯರು ತಿಳಿಸಿದರು. ಈ ಸಮಾಧಿಗಳ ಮೇಲಿರುವ ಮುಚ್ಚಳದ ಕಲ್ಲುಗಳನ್ನು (ಕ್ಯಾಪ್ ಸ್ಟೋನ್) ಒಡೆದು ತೆಗೆದು ಸಮಾಧಿಯ ಒಳಭಾಗದ ಮಡಿಕೆಗಳನ್ನೆಲ್ಲಾ ಹೊರತೆಗೆದು ಚೆಲ್ಲಾಪಿಲ್ಲಿ ಮಾಡಿದ್ದಾರೆ. ಹಾಗೆ ಹೊರತೆಗೆಯಲಾದ ಮಡಿಕೆ ಕುಡಿಕೆಗಳು ಅಲ್ಲಿಯೇ ಬಿದ್ದಿದ್ದವುಗಳನ್ನು ಸಂಗ್ರಹಿಸಿ ಸೂಕ್ಷ್ಮವಾಗಿ ಪರಿಶೀಲಿಸಿದೆನು.

ಆ ಮಡಿಕೆಗಳು ಹೊರಭಾಗದಲ್ಲಿ ಕೆಂಪನೆಯ ಬಣ್ಣ ಹೊಂದಿದ್ದು ಒಳಭಾಗದಲ್ಲಿ ಕಪ್ಪಗಿದ್ದವು. ಕುಂಬಾರರ ಚಕ್ರದಲ್ಲಿ ನಿರ್ಮಿಸಿ, ಒಣಗಿಸಿ ನಂತರ ಸುಡಲಾಗಿದ್ದ ಆ ಮಡಕೆಗಳು ತೆಳುವಾಗಿದ್ದು ಹಗುರವಾಗಿದ್ದವು. ಮಡಿಕೆಗಳ ಒಳಭಾಗದಲ್ಲಿ ಕೆಲವು ಮೂಳೆಗಳು ದೊರೆತರೂ ಅವು ಮುಟ್ಟಿದ ಕೂಡಲೇ ಪುಡಿಯಾಗಿಬಿಡುವಂತಿದ್ದವು.

ಸಮಾಧಿಯ ಒಳಭಾಗದಲ್ಲಿ ಎರಡು ಕಬ್ಬಿಣದ ಬಾಣಗಳು ದೊರೆತವೆಂದು ಅಲ್ಲಿನ ಸ್ಥಳೀಯರು ತಿಳಿಸಿದರು. ಆದರೆ ಅವುಗಳು ನನಗೆ ದೊರೆಯಲಿಲ್ಲ.

ಈ ಸಮಾಧಿಗಳ ಹತ್ತಿರದಲ್ಲಿಯೇ ಇರುವ ಕರೇಕಲ್ಲು ಗುಡ್ಡದಲ್ಲಿ ಕೆಲವು ಗವಿಗಳು ಮತ್ತು ಕೆಲವು ಕಲ್ಲಾಸರೆಗಳಿವೆ. ಇವು ಆ ಯುಗದ ಜನರ ವಾಸಕ್ಕೆ ಬಳಕೆಯಾಗಿದ್ದಿರಬಹುದೆಂದು ಊಹಿಸಬಹುದು.

ಸಾಮಾನ್ಯವಾಗಿ ಬೃಹತ್ ಶಿಲಾಯುಗದ ಜನರ ವಾಸದ ನೆಲೆಗಳ ಹತ್ತಿರದ ಬೆಟ್ಟಗುಡ್ಡಗಳಲ್ಲಿ, ಗವಿಗಳಲ್ಲಿ, ಕಲ್ಲಾಸರೆಗಳಲ್ಲಿ ಕೆಲವೊಮ್ಮೆ ರೇಖಾಚಿತ್ರಗಳು ಕಂಡು ಬರುತ್ತವೆ. ಆದರೆ ಪ್ರಸ್ತುತ ಪತ್ತೆಯಾಗಿರುವ ಹೊಸಪಾಳ್ಯದ ನಿವೇಶನದಲ್ಲಿ ಈ ರೀತಿಯ ರೇಖಾಚಿತ್ರಗಳು ದೊರೆತಿಲ್ಲ. ಈ ಪ್ರದೇಶದಲ್ಲಿ ಮತ್ತಷ್ಟು ಕ್ಷೇತ್ರಪರಿವೀಕ್ಷಣೆ ನಡೆಸಿದರೆ ಮತ್ತೇನಾದರೂ ಹೆಚ್ಚಿನ ಮಾಹಿತಿ ದೊರೆಯುವ ಸಾಧ್ಯತೆಗಳಿವೆ. ○